## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1230
ಸದಸ್ಯರ ಹೆಸರು : ಶ್ರೀ ರಿಜ್ವಾನ್ ಅರ್ಷದ್,
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 21.12.2018.
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ವಾಹನ ಕಳ್ಳತನ, ಮಹಿಳೆಯರ ಸರಗಳ್ಳತನ, ಮನೆಗಳ್ಳತನ, ರಸ್ತೆಯಲ್ಲಿ ನಿಲ್ಲಿಸಿದ್ದ ವಾಹನಗಳ ಗ್ಲಾಸ್ ಪುಡಿ/ಜಕಂ ಮಾಡುವುದು, ವೈದ್ಯಕೀಯ ಸೀಟು ವಂಚನೆ ಮತ್ತು ಡ್ರಗ್ಸ್ ಮಾರುವವರ ಮೇಲೆ ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ಕಾನೂನು ತಿದ್ದುಪಡಿ ತರುವ ಬಗ್ಗೆ ಸರ್ಕಾರದ ಸ್ಪಷ್ಟ ನಿರ್ಧಾರವೇನು: | ವಾಹನ ಕಳ್ಳತನ, ಮಹಿಳೆಯರ ಸರಗಳ್ಳತನ, ಮನೆಗಳ್ಳತನ, ರಸ್ತೆಯಲ್ಲಿ ನಿಲ್ಲಿಸಿದ್ದ ವಾಹನಗಳ ಗ್ಲಾಸ್ ಪುಡಿ/ಜಕಂ ಮಾಡುವುದು, ವೈದ್ಯಕೀಯ ಸೀಟು ವಂಚನೆ ಮತ್ತು ಡ್ರಗ್ಸ್ ಮಾರುವವರ ಮೇಲೆ ಭಾರತ ದಂಡ ಸಂಹಿತೆ ಹಾಗೂ ವಿಶೇಷ ಮತ್ತು ಸ್ಥಳೀಯ ಕಾನೂನುಗಳಡಿಯಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿ, ಸೂಕ್ತ ರೀತಿಯ ಕಾನೂನು ಕ್ರಮ ಜರುಗಿಸಲಾಗುತ್ತಿರುವುದರಿಂದ, ಕಾನೂನು ತಿದ್ದುಪಡಿ ಮಾಡುವ ಅವಶ್ಯವಿರುವುದಿಲ್ಲ. |
| ಆ | ಕಾನೂನಿನ ಸಡಿಲದಿಂದಾಗಿ ಆರೋಪಿಗಳು ಸುಲಭವಾಗಿ ಜಾಮೀನು ಪಡೆದು ಹಳೇ ವೃತ್ತಿಯನ್ನೇ ಮುಂದುವರೆಸುವುದು ಹೆಚ್ಚಾಗಿ ವರದಿಯಾಗುತ್ತಿದ್ದು, ಈ ಬಗ್ಗೆ ಕಠಿಣ ಕಾನೂನು ರೂಪಿಸಲು ತೆಗೆದುಕೊಂಡಿರುವ ಕ್ರಮಗಳೇನು: | ಪ್ರಸ್ತುತ ಇರುವ ಕಾನೂನಿನಡಿಯಲ್ಲಿ ಆರೋಪಿಗಳು ಸುಲಭವಾಗಿ ಜಾಮೀನು ಪಡೆಯದಂತೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುತ್ತಿದೆ. ಸ್ವತ್ತಿನ ಅಪರಾಧಗಳಲ್ಲಿ ಭಾಗಿಯಾದ ಆರೋಪಿಗಳ ಮೇಲೆ ಎಂಓಬಿ ಕಾರ್ಡ್‌ಗಳನ್ನು ತೆರೆದು ಕಠಿಣ ಕಾನೂನು ಕ್ರಮ ಜರುಗಿಸಲಾಗುತ್ತಿದೆ. ಈ ಸಂಬಂಧ ಕೋರ್ಟ್ ಮಾನಿಟರಿಂಗ್ ಸೆಲ್‌ಗಳನ್ನು ಪ್ರತಿ ಪೊಲೀಸ್ ಠಾಣೆಗಳಲ್ಲಿ ನಿರ್ವಹಿಸುತ್ತಿದ್ದು, ಆರೋಪಿಗಳು ಸುಲಭವಾಗಿ ಜಾಮೀನು ಪಡೆಯದಂತೆ ಕ್ರಮಕೈಗೊಳ್ಳಲಾಗುತ್ತಿದೆ. |
| ಇ | ಕಳ್ಳರ ಜಾಲವೇ ಇದ್ದು, ನಿಯಂತ್ರಣಕ್ಕೆ ಸಿಗದ ಕಳ್ಳತನದ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಸುಧಾರಣಾ ಕ್ರಮಗಳ ಮಾಹಿತಿ ನೀಡುವುದು? | ಈ ಕಳ್ಳತನಗಳನ್ನು ತಡೆಗಟ್ಟಲು ಹೊಸ ಬೀಟ್ ವ್ಯವಸ್ಥೆ, ಪಿಂಕ್ ಹೊಯ್ಸಳ, ಕಮ್ಯುನಿಟಿ ಪೊಲೀಸಿಂಗ್ ಮುಂತಾದವುಗಳನ್ನು ಜಾರಿಗೆ ತರಲಾಗಿರುತ್ತದೆ. ಸದರಿ ಪ್ರಕರಣಗಳ ಸಂಬಂಧ ಯಾವುದೇ ಕಳ್ಳರ ಜಾಲ ಕಂಡುಬಂದಿರುವುದಿಲ್ಲ. ಸಂಘಟಿತರಾಗಿ ಅಪರಾಧ ಎಸಗುವವರ ವಿರುದ್ಧ ಕೋಕಾ ಕಾಯ್ದೆ ಅಡಿ ಪ್ರಕರಣ ದಾಖಲಿಸಿ ಕ್ರಮ ಜರುಗಿಸಲಾಗುತ್ತಿದೆ. |

ಹೆಚ್‌ಡಿ 07 ಬೆಳಗಾವಿ 2018

(ಡಾ. ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ